ದೇವರಕೊಂಡಾರೆಡ್ಡಿ

# ಸೋಸಲೆಯು ನಿಶಿದಿ ಶಾಸನ

ಸೋಸಲೆಯು ತಿರುಮುಕ್ಕೂಡಲು ನರಸೀಪುರದ ಉತ್ತರದಿಕ್ಕಿನಲ್ಲಿದೆ. ಈ ಗ್ರಾಮವು ಮೂರು ಭಾಗವಾಗಿದ್ದು, ವ್ಯಾಸರಾಜರಮಠವಿರುವ (ಹೊಸ)ವ್ಯಾಸರಾಜಪುರ, ವೇಣುಗೋಪಾಲಕೃಷ್ಣ ದೇವಾಲಯವಿರುವ ಅಗ್ರಹಾರ ಮತ್ತು ಹಳೆಯ ಊರಾದ ಸೋಸಲೆ ಎಂದಾಗಿದೆ. ಮುಂದೆ ವಿವರಿಸಲಿರುವ ಶಾಸನವನ್ನು ಈಗ ವೇಣುಗೋಪಾಲಸ್ವಾಮಿ ದೇವಾಲಯದ ಆವರಣದಲ್ಲಿಯ ಅಮ್ಮನವರ ಗುಡಿಯ ಮುಂದೆ ನೆಲಕ್ಕೆ ಹಾಸಿರುತ್ತಾರೆ. ಈ ಶಾಸನವು ಹಳೆಯ ಸೋಸಲೆಯಲ್ಲಿದ್ದ ಜೋಡಿದಾರರ ಮನೆಯನ್ನು ಕಿತ್ತುಹಾಕುವಾಗ ಅಲ್ಲಿ ಕಂಡುಬಂದಿತು. ಅದನ್ನು ಈಗ ಕೃಷ್ಣಸ್ವಾಮಿ ದೇವಾಲಯದ ಅರ್ಚಕರು ಇಲ್ಲಿಗೆ ತರಿಸಿರುತ್ತಾರೆ. ನೆಲಕ್ಕೆ ಹಾಸಿ ಸೀಮೆಂಟು ಹಾಕಿರುವುದರಿಂದ ಇದರ ಅಂಚಿನಲ್ಲಿಯ ಅಕ್ಷರಗಳಲ್ಲಿ ಅನೇಕವು ಕಾಣುವುದಿಲ್ಲ. ಸೀಮೆಂಟು ಭದ್ರವಾಗಿ ಕಚ್ಚಿರುವುದರಿಂದ ಕೆರೆಯಲೂ ಕಷ್ಟ. ಹೀಗಾಗಿ ದೊರೆತಷ್ಟು ಶಾಸನಪಾಠವನ್ನು ನೀಡಿದ್ದೇನೆ.

ಶಾಸನದ ಉದ್ದ ಮತ್ತು ಅಗಲ ೩'×೩' ಆಗಿರುತ್ತದೆ. ಲಿಪಿಯು ಸಾಕಷ್ಟು ಪ್ರಾಚೀನರೂಪದಲ್ಲಿದ್ದು, ಅಕ್ಷರದ ತಲೆಕಟ್ಟುಗಳ ಬೆಳವಣಿಗೆಯೂ ಸರಿಯಾಗಿ ಆಗಿರುವುದಿಲ್ಲ. ಅಕ್ಷರಗಳು ತಾಳಗುಂದದ ಕಾಕುಸ್ಥವರ್ಮನ ಶಾಸನದಂತೆ ಉದ್ದವಾಗಿವೆ. 'ಉ'ಕಾರದ ಗುಡಿಸು ತಳಗಡೆ ಬೆಳೆದು ಮೇಲಕ್ಕೆ ತಿರುಗಿದೆ. 'ರ'ಕಾರದ ಒತ್ತು ಸ್ವಲ್ಪ ಮಾತ್ರ ಮೇಲಕ್ಕೆ ಬಂದಿದ್ದು, ಅಕ್ಷರದ ತಳಭಾಗಕ್ಕಿಂತ ಕೆಳಮಟ್ಟದಲ್ಲಿಯೇ ಇದೆ. ಷ, ಮ, ಚ, ವ, ಪ, ಬ ಮುಂತಾದ ಅಕ್ಷರಗಳ ಕೆಳಭಾಗ ಸ್ವಲ್ಪ ಮಾತ್ರ ಬಾಗಿದೆ. ಸ, ಯ ಅಕ್ಷರಗಳು ಇನ್ನೂ ಹೆಚ್ಚಿನ ಬೆಳವಣಿಗೆ ಪಡೆದಿಲ್ಲ. 'ಆ'ಕಾರದ ದೀರ್ಘವು ಅಕ್ಷರಗಳ ಹಿಂಬದಿಗೆ ಹಾದು ಕೆಳಕ್ಕೆ ಸ್ವಲ್ಪ ಮಾತ್ರ ಬಾಗಿರುತ್ತದೆ. 'ಸನ್ಯಾಸ', 'ಸೋಸಲೀ' ಎಂಬಲ್ಲಿ ಈ ಬಗೆಯ ಬೆಳವಣಿಗೆ ಕಾಣಬಹುದು. ಅಕ್ಷರಗಳ ತಲೆಕಟ್ಟುಗಳಲ್ಲಿ ತ್ರಿಕೋಣಾಕಾರದ ಛಾಯೆ ಕಂಡುಬರುತ್ತದೆ, ಶ್ರವಣಬೆಳಗೊಳದ ಭದ್ರಬಾಹುಮುನಿಯ ಶಾಸನದ ಅಕ್ಷರಗಳಿಗಿಂತ ಹಿಂದಿನ ಅಕ್ಷರದ ಲಕ್ಷಣಗಳನ್ನು ಹೊಂದಿದ್ದು, ತಲಕಾಡಿನ ಗಂಗರ ಪೆನಗೊಂಡೆ ಶಾಸನಲಿಪಿಗಳಿಗೆ ಹೋಲಿಕೆ ಇದೆ. ಹೀಗಾಗಿ, ಈ ಶಾಸನದ ಕಾಲವನ್ನು ಲಿಪಿಯ ದೃಷ್ಟಿಯಿಂದ ಕ್ರಿ. ಶ. ಸು. ಐದನೇ ಶತಮಾನಕ್ಕೆ ಸೇರಿಸಬಹುದಾಗಿದೆ.

ಶಾಸನದ ಪ್ರಾರಂಭದಲ್ಲಿ ಶುಭವಾಚಕ ಅಥವಾ ಶುಭಚಿಹ್ನೆಗಳಾದ ಸ್ವಸ್ತಿಯಾಗಲೀ ಅಂತಹ ಚಿಹ್ನೆಗಳಾಗಲೀ ಕಾಣಬರುವುದಿಲ್ಲ. ಶ್ರವಣಬೆಳಗೊಳದ ಅನೇಕ ಪ್ರಾಚೀನ ಶಾಸನಗಳಲ್ಲಿಯೂ ಈ ಬಗೆಯ ಶುಭವಾಚಕ ಅಥವಾ ಶುಭಚಿಹ್ನೆ ಕಂಡುಬಾರದಿರುವುದನ್ನು ಗಮನಿಸಬಹುದಾಗಿದೆ.

ಶಾಸನವಿರುವ ಭಾಗವನ್ನು ನಯವಾಗಿ ಸಮತಲಗೊಳಿಸಿ ನಾಲ್ಕುಸಾಲು ಕೆತ್ತಿರುತ್ತಾರೆ. ಉಳಿದ ಸ್ಥಳದಲ್ಲಿ ಏನನ್ನೂ ಕೆತ್ತದೆ ಜಾಗ ಬಿಟ್ಟಿರುತ್ತಾರೆ. ಶಾಸನದಲ್ಲಿ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ಯಾವುದೇ ವಿವರಗಳಿಲ್ಲ. ಈ ಶಾಸನೋಕ್ತ ಗುಣಸೇನಮುನಿಯ ಬಗ್ಗೆಯೂ ನಮಗೆ ಹೆಚ್ಚಿನ ವಿವರಗಳು ದೊರೆಯುವು

ದಿಲ್ಲ. ಗುಣಸೇನನು ಅರವತ್ತೈದು ವರ್ಷಗಳವರೆಗೆ ಬದುಕಿದ್ದು ಪಳಿದಂಗ ರೀತಿಯಲ್ಲಿ ನಿರ್ಗ್ರಂಥವನ್ನು ಸಾಧಿಸಿದಂತೆ ಹೇಳಿದೆ. ಚಾತುರ್ವರ್ಣದವರ ಪ್ರೀತಿಗೆ ಪಾತ್ರನಾಗಿ ಅಕ್ಷೀಣಾಗುಣವನ್ನು ಸಾಧಿಸಿ, ಸೋಸಲೆ ಗ್ರಾಮವನ್ನು ನಿರ್ಗ್ರಂಥತೀರ್ಥವನ್ನಾಗಿ ಮಾಡಿದನೆಂದು ಹೇಳಿದೆ. ಸೋಸಲೆಗ್ರಾಮವು ಈ ಶಾಸನದ ಕಾಲ ದಷ್ಟು ಪ್ರಾಚೀನನಾಮವುಳ್ಳದ್ದಾಗಿದ್ದು, ಜೈನತೀರ್ಥ ವಾಗಿತ್ತೆಂಬ ಅಂಶ ಇದರಿಂದ ತಿಳಿಯುತ್ತದೆ. ಈಗ ಸೋಸಲೆಯಲ್ಲಿ ಜೈನಧರ್ಮದ ವಾಸ್ತು ಅಥವಾ ಮೂರ್ತಿ ಶಿಲ್ಪದ ಯಾವ ಅವಶೇಷಗಳೂ ಕಾಣಬರುವುದಿಲ್ಲ. ಈಗ ಈ ಗ್ರಾಮವು ದ್ವೈತಮತದ ಒಂದು ಶಾಖೆಯ ಮತ್ತು ಸಪ್ತಮಾತೃಕಾಪ್ರಧಾನವಾಗಿಯುಳ್ಳ ಹೊನ್ನಾದೇವಿ ಕ್ಷೇತ್ರವಾಗಿದೆ.

ಶಾಸನದಲ್ಲಿ ಬರುವ 'ಪಳಿದಂಗ' ಎಂಬ ಪದದ ಅರ್ಥ ಸ್ಪಷ್ಟವಾಗುವುದಿಲ್ಲ. ಶ್ರವಣಬೆಳಗೊಳದ ಶಾಸನ ವೊಂದರಲ್ಲಿ "....ಮಹಾಮುನಿನೋನ್ಸು ಪಿನ್ ಇನದ ಅಟ್ಟಿದ್ದು ಪಳಿತಕ್ಕದೆ ನಾನ್ದಿವಮೇಱಿದಾನ್" ಎಂದಿದೆ.[1] ಪಳಿದಂಗ, ಪಳಿತಕ್ಕ ಇವೆರಡೂ ಒಂದೇ ಆಗಿದ್ದು, ಇವು ತಪಸ್ವಿನ ಆಸನದ ಒಂದು ಅಂಗವೆಂಬ ಅರ್ಥ ಬರುತ್ತದೆ. ಇಂತಹ ಆಸನ ಯಾವುದು ಎಂದು ಪರಿಶೀಲಿಸಿದರೆ, ಶ್ರವಣಬೆಳಗೊಳದ ಒಂದು ಜೈನಶಾಸನದಲ್ಲಿ "....ಅವ ಶಾಸ ಕಾಲಮನಱಿದು ಪಲ್ಯಂಕಾಶನದೊಳಿರ್ದು ಶಕ ೧೦೩೭....."[2] ಎಂಬ ಉಲ್ಲೇಖವಿರುವುದು ಕಂಡು ಬರುತ್ತದೆ. ಇಲ್ಲಿ ಪಲ್ಯಂಕವೆಂಬ ಆಸನದ ಉಲ್ಲೇಖ ವಿದ್ದು, ಇದಕ್ಕೂ ಮೂಲ ಪರ್ಯಂಕಾಸನ ಎಂಬ ಪದ ದೊರೆಯುತ್ತದೆ. ಬಹುಶಃ ಪರ್ಯಂಕ ಎಂಬ ಪದ ಪಳೀದಂಗ ಮತ್ತು ಪಲ್ಯಂಕಗಳಿಗೆ ಮೂಲವಿದ್ದಿರಬೇಕು.

ಚಾತುರ್ವರ್ಣ ಎಂಬ ಪದವೂ ಉಲ್ಲೇಖ ವಾಗಿದ್ದು, ಈ ಪದದ ಬಗ್ಗೆ ಡಾ॥ ಎಂ. ಚಿದಾನಂದ ಮೂರ್ತಿಯವರು ಚರ್ಚಿಸಿ, ಚಾತುರ್ವರ್ಣವೆಂದರೆ ಸನ್ಯಾಸಿ, ಸನ್ಯಾಸಿನಿ, ಜೈನಗೃಹಸ್ಥ, ಜೈನಗೃಹಸ್ಥೆ ಎಂಬ ಅರ್ಥ ಹೇಳಿರುತ್ತಾರೆ.[3] ಆದರೆ ಅವರು ನೀಡಿರುವ ಉದಾಹರಣೆಗಳನ್ನು ಗಮನಿಸಿದರೆ, ಚಾತುರ್ವರ್ಣ ವೆಂದರೆ ವೈದಿಕಧರ್ಮದ ಬ್ರಹ್ಮ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕುವರ್ಣಗಳೆಂಬ ಅರ್ಥ ಬರುವಂತಿದೆ.[4] ಚಾತುರ್ವರ್ಣ ಎಂಬ ಶಬ್ದವು ಶ್ರವಣ ಬೆಳಗೊಳದ ಒಂದು ಶಾಸನದಲ್ಲಿ, "ಪರಿತ್ಯಜ್ಯಂ ಗಣಂ ಸರ್ವ್ವಂ ಚಾತುರ್ವರ್ಣ ವಿಶೇಷಿತಮ್ ಆಹಾರಾದಿ ಶರೀರಂ ಚ ಕಟವಪ್ರ ಗಿರಾವಿಹ...."[5] ಎಂಬ ಉಲ್ಲೇಖ ದಲ್ಲಿ ಬಂದಿದೆ. ಇದರಲ್ಲಿಯೂ ಚಾತುರ್ವರ್ಣವೆಂದರೆ ವೈದಿಕಧರ್ಮದ ನಾಲ್ಕುವರ್ಣಗಳೆಂಬ ಅರ್ಥವೇ ಇದೆ. ಜೈನಧರ್ಮವು ವರ್ಣಗಳ ವಿರುದ್ಧವೆನಿಸಿದ್ದರೂ ವೈದಿಕ ಧರ್ಮದ ಪ್ರಭಾವದಿಂದ ಅದನ್ನು ಒಪ್ಪಿಕೊಂಡಿತ್ತೆಂದು ಹೇಳಬಹುದಾಗಿದೆ.

ನಿವೇದನೆ : ದಿನಾಂಕ ೬-೨-೯೮ರಲ್ಲಿ ಸೋಸಲೆಗೆ ಹೋಗಿ ದ್ದಾಗ ಈ ಶಾಸನದ ಪಾಠವನ್ನು ಸ್ಥಳದಲ್ಲಿ ಓದಿ ತಂದಿದ್ದೆ. ಎರಡು ವರ್ಷಗಳ ನಂತರ ಹೋದಾಗ ನೆಲಕ್ಕೆ ಹಾಸಿ ಸೀಮೆಂಟು ಅಂಟಿಸಿಬಿಟ್ಟಿದ್ದರು. ಹೀಗಾಗಿ ಶಾಸನಪ್ರತಿಯಲ್ಲಿ ಶಾಸನದ ಮೊದಲ ಸಾಲು ಮತ್ತು ಉಳಿದ ಅಂಚುಗಳ ಅಕ್ಷರಗಳು ಮೂಡಿ ರುವುದಿಲ್ಲ. ಆದ್ದರಿಂದ ಶಾಸನಪಾಠವನ್ನು ಪೂರ್ಣವಾಗಿ ಪ್ರಮಾ ಣೀಕೃತವಾಗಿ ಓದಲು ಸಾಧ್ಯವಾಗಿರುವುದಿಲ್ಲ. ಕಂಸದಲ್ಲಿ ನೀಡಿ ರುವ ಪಾಠಾಂತರಗಳು ಸೀಮೆಂಟಿನಿಂದ ಆವೃತ್ತವಾಗಿದ್ದು, ೯೮ರಲ್ಲಿ ಸ್ಥಳದಲ್ಲೇ ಬರೆದುಕೊಂಡಿರುವ ಕಣ್‌ಕಾಪಿಯಿಂದ ನೀಡಿದ ಪಾಠವಾಗಿರುತ್ತದೆ.

---

1. ಎ.ಕ., ಸಂಪುಟ ೨ (ಪರಿಷ್ಕೃತ), ೧೩೦
2. ಅದೇ, ೧೫೭
3. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಪುನರ್‌ಮುದ್ರಣ), ಪು. ೮೭
4. ಅದೇ
5. ಎ.ಕ., ಸಂಪುಟ ೨ (ಪರಿಷ್ಕೃತ), ೧೩

**ಸೋಸಲೆಯ ನಿಶಿದಿ ಶಾಸನ**

**ಶಾಸನ ಪಾಠ**

೧. ಸರ್ವ್ವಜ್ಞೇನ× ಪೂರ್ವದ್ಯಾಗುರಾರವಯ[ನಾನ್ಮಮತ] ಪುತ್ರೋ
ಗುಣಸೇನಾಖ್ಯ[ಪನ್ಚಶಟ್ ಸ]

೨. × ತಮ್ಯೃಶ್ಯರೀರ ಸನ್ಯಾಸಂ ಸುಬುದ್ಧಿಗೃಹವರ್ದ್ಧೀಶಂ ಪಳಿದಂಗಂ
ಸ್ಸಾದ್ಧ್ಯತೇ ಕ್ಷಿಪ್ರ ನಿರ್ಗ್ರಂಥ ತಕ್ಷ [ನಾತ್ಮೀಕ×]

೩. × ತೀರ್ತ್ಥಂ ಸೋಸಲೀಗ್ರಾಮೇ ಚಾತುರ್ವ್ವರ್ಣ ಸಮಾನ್ವಿತ ಮಾನ
ಸರ್ವ್ವಕಾಲೇಷುಃ ಮಕ್ಷೀಣಾಗುಣಸಾ[ಧಿರ್ತಾ]

೪. [×ನಿ]ರ್ಗ್ರನ್ತಮುಸಯಕ್ಷೇತ್ರ ಸರ್ವಧರ್ಮ್ಮಸ್ಯ ಸಾಧನಃ ಗುಣಸೇನಾ
ಮ್ನಹೇತುಶ್ಚ ತ್ರಿವಿಧಸುಚೇಸಂಪ್ರೀ[ಚಯ×](?)

**ಸಾರಾಂಶ :** ಹಿಂದಿನ ಸ್ಮರಣೆಯಿಂದ ಬಲ್ಲವರಿಂದ ಗುರುವಿನ ಮಮತೆಯ ಮಗನೆಂದು ಪರಿಗಣಿಸಲಾದ (ಶಿಷ್ಯನಾದ) ಗುಣಸೇನನೆಂಬುವನು ಅರವತ್ತೈದು ವರ್ಷದ ನಶ್ವರಶರೀರವನ್ನು ಧರಿಸಿ (ಅದನ್ನು) ಸನ್ಯಾಸವೆಂಬ ಸದ್ಬುದ್ಧಿಗೆ ಆಲಯವನ್ನಾಗಿಸಿ ವಸ್ತ್ರತ್ಯಾಗವನ್ನು ಸಾಧಿಸಿ ಬೇಗನೆ ನಿರ್ಗ್ರಂಥ ಪಂಗಡದವರಿಗೆ ಆತ್ಮೀಯನಾದನು. ಮೂರು ಕ್ರಿಯೆಗಳಿಂದ (ರತ್ನತ್ರಯ) ಸರ್ವ್ವಧರ್ಮದ ಏಳಿಗೆಗೆ ಕಾರಣನಾದ ಗುಣಸೇನನು ಚಾತುರ್ವರ್ಣದಿಂದ ಕೂಡಿದ ಸೋಸಲೆಗ್ರಾಮದಲ್ಲಿ ಅಕ್ಷೀಣಾಗುಣವನ್ನು ಸಾಧಿಸಿ ಅದನ್ನು ನಿರ್ಗ್ರಂಥತೀರ್ಥವನ್ನಾಗಿಸಿದನು.*

---

* ಶಾಸನಪ್ರತಿ ತೆಗೆಯುವಲ್ಲಿ ಸಹಕರಿಸಿದ ಶ್ರೀ ಅ. ಲ. ನರಸಿಂಹನ್ ಅವರಿಗೂ ಶಾಸನಪಾಠವನ್ನು ಅರ್ಥೈಸುವಲ್ಲಿ ಸಹಾಯ ನೀಡಿದ ಶ್ರೀಮತಿ ವಸಂತಲಕ್ಷ್ಮಿ ಅವರಿಗೂ ಋಣಿಯಾಗಿದ್ದೇನೆ.